CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೪, ೨೦೦೪ (ಆಶ್ವಯುಜ ೨೨, ಶಕ ವರ್ಷ ೧೯೨೬) | ಸಂಚಿಕೆ ೪೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಲೋಕೋಪಯೋಗಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಲೋಇ 108 ಸೇಎಸು 2004, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್, 2004**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ: 27.04.1978ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ/ ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರೀವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ, ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ, ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 11.04.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ಹಾಗೂ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 11.04.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 84 ಎಸ್‌ಪಿಜಿ 2002ರಲ್ಲಿ ಪ್ರಕಟಿಸಲಾಗಿದೆ.

ದಿನಾಂಕ: 11.04.2002ರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಸಿ.ಪಿ. ಪಾಟೀಲ್, ಜೇಷ್ಠತೆಯು ಅನುಕ್ರಮವಾಗಿ ಕ್ರಮ ಸಂಖ್ಯೆ: 1717 ಹಾಗೂ ಕ್ರಮ ಸಂಖ್ಯೆ 2238ರಲ್ಲಿ ಪ್ರತಿಬಿಂಬಿತರಾಗಿದ್ದು, ಈ ಜೇಷ್ಠತೆಯನ್ನು ಗೊತ್ತುಪಡಿಸಿರುವ ಬಗ್ಗೆ ಶ್ರೀ ಸಿ.ಪಿ. ಪಾಟೀಲ್‌ರವರು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ, ತಾವು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿದ್ದು ದಿನಾಂಕ: 10.01.1990ರಂದು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ವೃಂದಕ್ಕೆ ಪದೋನ್ನತಿ ಹೊಂದಿರುವುದಾಗಿ ತಿಳಿಸಿ, ದಿನಾಂಕ: 03.12.1997ರಂದು ಅಧಿಸೂಚನೆ ಸಂಖ್ಯೆ: ಲೋಇ 209 ಸೇಸೆ 96ರಲ್ಲಿ ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ತಮ್ಮ ಹೆಸರು ಕ್ರಮ ಸಂಖ್ಯೆ: 873ರಲ್ಲೂ ಹಾಗೂ ತಮಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್, ರವರ ಹೆಸರು ಕ್ರಮ ಸಂಖ್ಯೆ: 874ರಲ್ಲಿ ಪ್ರತಿಬಿಂಬಿತವಾಗಿದ್ದು, ಈ ಜೇಷ್ಠತೆಯನುಸಾರ ತಮಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ದಿನಾಂಕ: 26.02.99 ರಂದು ಪದೋನ್ನತಿ ನೀಡಲಾಗಿರುವುದಾಗಿ ತಿಳಿಸಿರುತ್ತಾರೆ. ಶ್ರೀ ಚಂದ್ರ ಮೌಳಿನಾಯಕ್ ರವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದಗಳಲ್ಲಿ ಬಡಪ್ಪನವರ ಪ್ರಕರಣದ ಪೂರ್ವದಲ್ಲಿ ತಮಗಿಂತ ಸೇವೆಯಲ್ಲಿ ಕಿರಿಯರಾಗಿರುತ್ತಾರೆ. ಈ ಮಧ್ಯೆ ಶ್ರೀ ಎಂ.ಜಿ. ಬಡಪ್ಪನವರ್ ಪ್ರಕರಣದಲ್ಲಿ ನೀಡಿದ ನಿರ್ದೇಶನದನ್ವಯ ತಮಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಹಿಂಬಡ್ತಿ ನೀಡಲಾಗಿತ್ತೆಂದೂ, ತದನಂತರ ಸಂವಿಧಾನದ 85ನೇ ತಿದ್ದುಪಡಿಯನ್ವಯ ಪುನಃ ತಮಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪುನರ್ ಪದೋನ್ನತಿ ದಿನಾಂಕ 11.04.2002ರಂದು ನೀಡಿದ್ದರೂ, ದಿನಾಂಕ: 11.04.2002ರಂದು ಪ್ರಕಟಿಸಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಗಳಲ್ಲಿ ತಮಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್ ರವರ ಹೆಸರನ್ನು ಅನುಕ್ರಮವಾಗಿ ಕ್ರಮಸಂಖ್ಯೆ 1436 ಹಾಗೂ 2064ರಲ್ಲಿ ನಮೂದಿಸಿದ್ದು ತಮ್ಮ ಹೆಸರನ್ನು ಅನುಕ್ರಮವಾಗಿ ಕ್ರಮ ಸಂಖ್ಯೆ: 1717 ಹಾಗೂ 2238 ರಲ್ಲಿ ನಮೂದಿಸಿರುವುದರಿಂದ ತಮಗೆ ಜೇಷ್ಠತೆಯಲ್ಲಿ ವ್ಯತ್ಯಾಸವಾಗಿದ್ದು ಇದರಿಂದ

ಶ್ರೀ ಚಂದ್ರಮೌಳಿನಾಯಕ್ ರವರು ಈಗಾಗಲೇ ಅಧೀಕ್ಷಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ಹೊಂದಿರುವುದಾಗಿ, ತಮಗೆ ಮಾತ್ರ ಈ ಪದೋನ್ನತಿ ಅವಕಾಶ ತಪ್ಪಿರುವುದಾಗಿ ತಿಳಿಸಿ ಅಧಿಸೂಚನೆ ಸಂಖ್ಯೆ ಲೋಇ 209 ಸೇಸಎ 96 ದಿನಾಂಕ: 03.12.97ರಲ್ಲಿ ಪ್ರಕಟಿಸಲಾಗಿದ್ದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಗಳನ್ನು ಆಧರಿಸಿ ತಮ್ಮ ಜೇಷ್ಠತೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದಗಳಲ್ಲಿ ಪುನರ್ ನಿಗದಿಪಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಶ್ರೀ ಸಿ.ಪಿ. ಪಾಟೀಲ್ ರವರು ಸಲ್ಲಿಸಿರುವ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಭಾರತ ಸರ್ವೋಚ್ಛ ನ್ಯಾಯಾಲಯವು ಭಾರತ ಸಂವಿಧಾನದ 85ನೇ ತಿದ್ದುಪಡಿಯನ್ವಯ ಲಭ್ಯವಾಗಬಹುದಾದ ಎಲ್ಲಾ ಸೇವಾ ಸೌಲಭ್ಯಗಳನ್ನು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಅಧಿಕಾರಿಗಳಿಗೆ ನೀಡಬೇಕೆಂದು ದಿನಾಂಕ: 11.11.2002ರ ಸ್ಪಷ್ಟೀಕರಣ ಆದೇಶದಲ್ಲಿ ಸ್ಪಷ್ಟ ನಿರ್ದೇಶನ ನೀಡಿದೆ. ಅಲ್ಲದೇ ಕರ್ನಾಟಕ ಸರ್ಕಾರವು ದಿನಾಂಕ: 27.02.2002 ಮತ್ತು 28.02.2002ರಂದು ಹೊರಡಿಸಿದ ಸುಗ್ರೀವಾಜ್ಞೆಗಳನ್ನು ಕರ್ನಾಟಕ (ರಾಜ್ಯದ ಸಿವಿಲ್ ಸೇವೆಗಳ ಹುದ್ದೆಗಳಿಗೆ) ಮೀಸಲಾಗಿ ಆಧಾರದ ಮೇಲೆ ಬಡ್ತಿ ಹೊಂದಿದ ಸರ್ಕಾರಿ ನೌಕರರ ಜೇಷ್ಠತೆಯ ನಿರ್ಧಾರಣೆ ಅಧಿನಿಯಮ (2002ರ ಅಧಿನಿಯಮ ಸಂಖ್ಯೆ 10) ಎಂಬ ಅಧಿನಿಯಮವನ್ನಾಗಿ ಪರಿವರ್ತಿಸಿ ಆದೇಶ ಹೊರಡಿಸಿದೆ. ಈ ಅಧಿನಿಯಮದ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಧಿಕಾರಿಗಳಿಗೆ ರೋಸ್ಟರ್ ಪದ್ಧತಿಯನ್ವಯ ಪಡೆದ ಬಡ್ತಿ ಸೌಲಭ್ಯವನ್ನು ಪುನರ್ ಸ್ಥಾಪಿಸಬೇಕಾಗಿದೆ ಹಾಗಾಗಿ ಶ್ರೀ ಸಿ.ಪಿ. ಪಾಟೀಲ್‌ರವರು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಧಿಕಾರಿಯಾಗಿದ್ದು, ಶ್ರೀ ಚಂದ್ರಮೌಳಿನಾಯಕ್ ರವರಿಗಿಂತ ಬಡಪ್ಪನವರ್ ಪ್ರಕರಣದ ಪೂರ್ವದಲ್ಲಿ ಎಲ್ಲಾ ವೃಂದಗಳಲ್ಲಿ ಹಿರಿಯರಾಗಿರುವುದರಿಂದ ಈ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದ್ದರಿಂದ ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್, ರವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಮತ್ತು ಕಾರ್ಯಪಾಲಕ ಇಂಜಿನಿಯರ್ ಹುದ್ದೆಗಳಿಗೆ ಪದೋನ್ನತಿ ಹೊಂದಿದ ದಿನಾಂಕವನ್ನು ಗಣನೆಗೆ ತೆಗೆದುಕೊಂಡು ದಿನಾಂಕ: 11.04.2002ರಂದು ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಜೇಷ್ಠತೆಯನ್ನು ನಿಗದಿಪಡಿಸಲು ಉದ್ದೇಶಿಸಲಾಗಿದೆ. ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂದು, ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ, ಸರ್ವೋಚ್ಛನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಅನುಸಾರವಾಗಿ ಪುನರ್ ಪರಿಷ್ಕರಣೆಗೊಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002 ದಿನಾಂಕ: 11.04.2002ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ: 1717ಕ್ಕೆ ಬದಲಾಗಿ ಕ್ರಮ ಸಂಖ್ಯೆ: 1436ಎ ನ್ನಾಗಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಪಿಡಬ್ಲ್ಯೂಡಿ 84 ಎಸ್‌ಪಿಜಿ 2002 ದಿನಾಂಕ: 11.04.2002ರಲ್ಲಿ ಪ್ರಕಟಿಸಲಾಗಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ 2238ಕ್ಕೆ ಬದಲಾಗಿ ಕ್ರಮಸಂಖ್ಯೆ 2064ಎ ನ್ನಾಗಿ ಈ ಕೆಳಕಂಡಂತೆ ಸೇರ್ಪಡೆ ಮಾಡಲು ಪ್ರಸ್ತಾಪಿಸಿದೆ.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಪದವೃಂದದ ದಿನಾಂಕ: 11.04.2002ರ ಜೇಷ್ಠತಾ ಪಟ್ಟಿಯಲ್ಲಿ**

| AEE Grd. No. | List No. | AE Grd No. | Petition No. | Name of the Engineer | SC/ST | Date of Birth | AEE Promotion date | Eligibility Date | Remarks |
|---|---|---|---|---|---|---|---|---|---|
| 1436A | 2 | 3099 | | Patil C.P. | ST | 04/01/52 | 16/10/1990 | 02/03/1990 | |

**ಕಾರ್ಯಪಾಲಕ ಇಂಜಿನಿಯರ್ ಪದವೃಂದದ ದಿನಾಂಕ: 11.04.2002ರ ಜೇಷ್ಠತಾ ಪಟ್ಟಿಯಲ್ಲಿ**

| Sl.No. | List No. | AE Grd No. | Name of the Engineer | SC/ST | Date of Birth | Date of Promotion | Eligibility Date | Remarks |
|---|---|---|---|---|---|---|---|---|
| 2064A | 2 | 3099 | Patil C.P. | ST | 04/01/52 | 26/02/1999 | 26/02/1999 | |

ಮೇಲ್ಕಂಡ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ರ ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದಲ್ಲಿ ಅರ್ಹತಾ ದಿನಾಂಕ ಹಾಗೂ ಜೇಷ್ಠತಾ ಪಟ್ಟಿಗಳಲ್ಲಿ ಮಾರ್ಪಾಟು ಮಾಡುವುದರಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಗಳೊಂದಿಗೆ ಈ ತಿದ್ದುಪಡಿಯು ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿನಗಳ ಒಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬಹುಮಹಡಿಗಳ ಕಟ್ಟಡ, 5ನೇ ಹಂತ, 3ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಸಿ. ಬಸವರಾಜು

ಪಿ.ಆರ್.986

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಬಿ.ಆರ್.ಲಮಾಣಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೀದರ್, ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ–ಅಂತಿಮ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ:ಇಡಿ 38 ಡಿಜಿಡಿ 2002 ದಿ:3.4.2002 ಮತ್ತು ಅಧಿಸೂಚನೆ ದಿನಾಂಕ:27.11.2002.
2. ಸೂಚನ ಪತ್ರ ಸಂ:ಇಡಿ 38 ಡಿಜಿಡಿ 2002 ದಿ:19.10.2002.
3. ಶ್ರೀ ಲಮಾಣಿ ಇವರ ಪ್ರತಿರಕ್ಷಣಾ ಹೇಳಿಕೆ ದಿ:14.1.2003.

4. ಸರ್ಕಾರಿ ಆದೇಶ ಸಂ:ಇಡಿ 38 ಡಿಜಿಡಿ 2002 ದಿ:6.2.2003.
5. ನಿರ್ದೇಶಕರು, ಈಶಾನ್ಯವಲಯ ಶಿಕ್ಷಣಾಭಿವೃದ್ಧಿ ನಿರ್ದೇಶನಾಲಯ, ಗುಲ್ಬರ್ಗಾ, ಹಾಗೂ ವಿಚಾರಣಾಧಿಕಾರಿ, ಇವರ ವರದಿ ಸಂ:ಆಶಾ.1:ವಿಚಾರಣೆ:2002–03 ದಿ:26.7.2003.
6. 2ನೇ ಕಾರಣ ಕೇಳುವ ನೋಟೀಸ್ ಸಂ:ಇಡಿ 38 ಡಿಜಿಡಿ 2002 ದಿ:6.1.2004.
7. ಶ್ರೀ ಬಿ.ಆರ್.ಲಮಾಣಿ ಇವರ ಪ್ರತಿರಕ್ಷಣಾ ಹೇಳಿಕೆ ದಿ:14.1.2004.

**ಪ್ರಸ್ತಾವನೆ:**

ಶ್ರೀ ಬಿ.ಆರ್.ಲಮಾಣಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೀದರ್ ಇವರು ಈ ಹಿಂದೆ ಬಾಗಲಕೋಟೆ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಉಪನಿರ್ದೇಶಕರ ಕಾರ್ಯಾಲಯದ ಖರ್ಚುವೆಚ್ಚಕ್ಕಾಗಿ 9 ಸರ್ಕಾರಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಿಗೆ ಪತ್ರ ಬರೆದು ಒಟ್ಟು ರೂ. 98,000/–ಗಳನ್ನು ಪಡೆದುಕೊಂಡು, ಈ ಮೊತ್ತ ಖರ್ಚು ಮಾಡಿರುವ ಬಗ್ಗೆ ಲೆಕ್ಕಪತ್ರಗಳನ್ನು ಇಡದೇ ದುರುಪಯೋಗಪಡಿಸಿಕೊಂಡಿರುವ ಆರೋಪದ ಮೇರೆಗೆ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:3.4.2002 ರ ಸರ್ಕಾರಿ ಆದೇಶದ ಮೂಲಕ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಟ್ಟು, ತದನಂತರ ದಿನಾಂಕ:27.11.2002 ರ ಅಧಿಸೂಚನೆಯಲ್ಲಿ ಅಮಾನತ್ತನ್ನು ತೆರವುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ:19.10.2002 ರಲ್ಲಿ ಸೂಚನಾ ಪತ್ರವನ್ನು ಆರೋಪಣಾ ಪಟ್ಟಿಯೊಂದಿಗೆ ಸಿಸಿಎ ನಿಯಮ 11 ರಡಿಯಲ್ಲಿ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ಸಲ್ಲಿಸಿದ್ದ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿದ ನಂತರ, ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಧರಿಸಿ ಮೇಲೆ ಓದಲಾದ ಕ್ರಮಾಂಕ (4) ರ ದಿನಾಂಕ:6.2.2003 ರ ಸರ್ಕಾರಿ ಆದೇಶದ ಮೂಲಕ ನಿರ್ದೇಶಕರು, ಈಶಾನ್ಯ ವಲಯ ಶಿಕ್ಷಣಾಭಿವೃದ್ಧಿ ನಿರ್ದೇಶನಾಲಯ, ಗುಲ್ಬರ್ಗಾ, ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬಾಗಲಕೋಟೆ ಜಿಲ್ಲೆ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು,

ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮಾಂಕ (5) ರ ದಿನಾಂಕ:26.7.2003 ರಲ್ಲಿ ಆಪಾದಿತರುಗಳ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಆಪಾದಿತರು ಮುಂಗಡವನ್ನು ದುರುದ್ದೇಶಪೂರ್ವಕವಾಗಿ ಪಡೆದಿಲ್ಲವೆಂದು ತಿಳಿಸಿದ್ದಾರೆ. ಹೊಸದಾಗಿ ಪ್ರಾರಂಭವಾದ ಬಾಗಲಕೋಟೆ ಜಿಲ್ಲಾ ಉಪನಿರ್ದೇಶಕರ ಕಚೇರಿಯ ಅಗತ್ಯ ಅನಿವಾರ್ಯ ಕೆಲಸ ಕಾರ್ಯ ಚಟುವಟಿಕೆಗಳಿಗಾಗಿ ಖರ್ಚು ಮಾಡಿರುವುದು ಕಂಡುಬಂದಿದೆ ಎಂದು ಈ ಹಣ ಪಡೆಯುವಾಗ ಅವರು ನಿಯಮ ಅನುಸರಿಸದಿದ್ದರೂ, ಕಚೇರಿಯ ವೆಚ್ಚಕ್ಕಾಗಿ ಅನಿವಾರ್ಯವಾಗಿ ಡ್ರಾ ಮಾಡಬೇಕಾದ ಸಂದರ್ಭ ಬಂದೊದಗಿದ್ದರಿಂದ ಇಂತಹ ಕ್ರಮ ಅನುಸರಿಸಿದ್ದಾರೆಂದೂ, ಕರ್ತವ್ಯ ನಿರ್ವಹಣೆಯಲ್ಲಿನ ಆಡಳಿತಾತ್ಮಕ ನ್ಯೂನ್ಯತೆಯಾಗಿದೆಯೆಂದು ನಿರ್ಣಯಿಸಿದ್ದರು. ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಸರ್ಕಾರವು ತಿರಸ್ಕರಿಸಿ ಏಕೆ ದಂಡನೆ ವಿಧಿಸಬಾರದೆಂಬ ಬಗ್ಗೆ ಆಪಾದಿತರಿಗೆ ದಿನಾಂಕ:26.7.2003 ರಲ್ಲಿ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ಪ್ರತಿಯೊಂದು ಆರೋಪಗಳಿಗೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಅವರ ಮೇಲಿನ ಎಲ್ಲಾ ಆರೋಪಗಳನ್ನು ಅಲ್ಲಗಳೆದಿದ್ದಾರೆ.

ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ಆಪಾದಿತರು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶ ಹಾಗೂ ಇದಕ್ಕೆ ಪೂರಕವಾದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆಪಾದಿತರ ಮೇಲಿನ ಆರೋಪವು ಆಡಳಿತಾತ್ಮಕ ಲೋಪವಾಗಿರುವುದನ್ನು ಪರಿಗಣಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 38 ಡಿಜಿಡಿ 2002, ಬೆಂಗಳೂರು, ದಿನಾಂಕ: 31ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಆರ್.ಲಮಾಣಿ, ನಿವೃತ್ತ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೀದರ್ ಇವರ ಮೇಲಿನ ಆರೋಪದಲ್ಲಿ ಆಡಳಿತಾತ್ಮಕ ಲೋಪವಾಗಿರುವುದನ್ನು ಪರಿಗಣಿಸಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 9 ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅದೇ ನಿಯಮಾವಳಿಗಳ ನಿಯಮ 8(ii) ಅಡಿಯಲ್ಲಿ **ವಾಗ್ದಂಡನೆ** ವಿಧಿಸಿ ಆದೇಶಿಸಿದೆ.

ಶ್ರೀ ಬಿ.ಆರ್.ಲಮಾಣಿ ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕೆಸಿಎಸ್‌ಆರ್ ನಿಯಮ 100(7) ರನ್ವಯ ಅವರ ಹಕ್ಕಿನಲ್ಲಿರುವ ರಜೆಯನ್ನು ಸಕ್ಷಮ ಪ್ರಾಧಿಕಾರವಾದ ಸರ್ಕಾರದಿಂದ ಮಂಜೂರು ಮಾಡಿಸಿಕೊಳ್ಳುವ ಷರತ್ತನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಫ್.ಆರ್. ಸಂಬರಗಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.971

## ಒಳಾಡಳಿತ ಸಚಿವಾಲಯ

**ವಿಷಯ :** ಮತೀಯ ನಾಗರೀಕ ಗಲಭೆಗಳಲ್ಲಿ ತೊಂದರೆಗೊಳಗಾದವರಿಗೆ ಪರಿಹಾರ ಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶದ ಸಂಖ್ಯೆ: ಹೆಚ್‌ಡಿ 75 ಎಸ್‌ಎಸ್‌ಟಿ 93 ದಿನಾಂಕ: 02.03.1993.
2. ಸರ್ಕಾರದ ಆದೇಶದ ಸಂಖ್ಯೆ: ಹೆಚ್‌ಡಿ 811 ಎಸ್‌ಎಸ್‌ಟಿ 92 ದಿನಾಂಕ: 22.10.1994.
3. ಸರ್ಕಾರದ ಆದೇಶದ ಸಂಖ್ಯೆ: ಹೆಚ್‌ಡಿ 71 ಎಸ್‌ಎಸ್‌ಟಿ 95 ದಿನಾಂಕ: 23.08.1995 ಮತ್ತು 11.12.1995.

**ಪ್ರಸ್ತಾವನೆ:**

ಉಲ್ಲೇಖಿತ ಆದೇಶದನ್ವಯ, ಮತೀಯ ನಾಗರೀಕ ಹಾಗೂ ಒಂದೇ ಧರ್ಮದ ವಿವಿಧ ಕೋಮುಗಳ ನಡುವೆ ನಡೆಯುವ ಗಲಭೆಗಳಲ್ಲಿ ಮೃತಪಟ್ಟ, ಗಾಯಗೊಂಡ, ಆಸ್ತಿಪಾಸ್ತಿ ನಷ್ಟ ಅನುಭವಿಸಿದವರಿಗೆ ಪರಿಹಾರ ಮಂಜೂರು ಮಾಡಲು ಪರಿಹಾರದ ಮೊತ್ತವನ್ನು ನಿಗದಿಗೊಳಿಸಿ, ಪರಿಹಾರಧನವನ್ನು ಮಂಜೂರು ಮಾಡುವ ಪೂರ್ಣ ಅಧಿಕಾರವನ್ನು ಅನುಕ್ರಮವಾಗಿ ಆಯಾಯ ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ. ಹಾಗೂ ಮತೀಯ ಗಲಭೆಯಿಂದ ಹಾನಿಗೀಡಾದ ಅಥವಾ ನೆಲಸಮ ಹೊಂದಿದ್ದ ಪೂಜಾ ಸ್ಥಳವನ್ನು ದುರಸ್ಥಿಗೊಳಿಸುವ ಅಥವಾ ಸದರಿ ಪೂಜಾ ಸ್ಥಳವನ್ನು ಮೊದಲಿದ್ದಂತೆ ನಿರ್ಮಿಸುವ ಕುರಿತು ಸೂಕ್ತ ಕ್ರಮ ತೆಗೆದುಕೊಳ್ಳುವ ಬಗ್ಗೆಯೂ ಸಹ ಜಿಲ್ಲಾಧಿಕಾರಿಗಳಿಗೆ ನಿರ್ದೇಶನವನ್ನು ನೀಡಲಾಗಿದೆ.

ಇಂತಹ ಗಲಭೆಗಳಲ್ಲಿ ಸಾವು-ನೋವು ಅನುಭವಿಸಿದವರಿಗೆ ಆಸ್ತಿ-ಪಾಸ್ತಿ ನಷ್ಟ ಹೊಂದಿದವರಿಗೆ ಪರಿಹಾರ ಮಂಜೂರು ಮಾಡುವ ಹಾಗೂ ಹಾನಿಗೊಳಗಾದ ಪೂಜಾ ಸ್ಥಳವನ್ನು ದುರಸ್ಥಿ ಪುನರ್ ನಿರ್ಮಾಣ ಮಾಡುವ ಕೆಲಸಗಳು ತುಂಬಾ ತುರ್ತಿನವು, ತೀರಾ ಅಗತ್ಯವಾದವುಗಳೂ ಆಗಿರುವುದರಿಂದ ಹಾಗೂ ಮಾನವೀಯತೆಯ ದೃಷ್ಟಿಯಿಂದ ಅನುಕಂಪದ ಮೇರೆಗೆ ತಕ್ಷಣ ಪುನರ್ ವಸತಿ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಆದ್ದರಿಂದ, ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಹಣಕಾಸಿನ ಅವಕಾಶದಿಂದ ಹಣ ಬಿಡುಗಡೆಗಾಗಿ ಆಯಾಯ ಜಿಲ್ಲಾಧಿಕಾರಿಗಳಿಂದ ಬಂದ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಹಣ ಮಂಜೂರು ಮಾಡಿದ ಆಡಳಿತಾತ್ಮಕ ತೊಂದರೆಗಳನ್ನು ನಿವಾರಿಸುವ ಹಾಗೂ ಪರಿಹಾರ ಮತ್ತು ಪುನರ್ ವಸತಿ ಕಾರ್ಯಕ್ರಮಗಳ ವಿಳಂಬಕ್ಕೆ ಅವಕಾಶ ನೀಡದೇ ತ್ವರಿತವಾಗಿ ಪ್ರಕರಣಗಳನ್ನು ಇತ್ಯರ್ಥಗೊಳಿಸಲು ಅನುಕೂಲವಾಗುವಂತೆ ಉಲ್ಲೇಖ (3)ರ ಸರ್ಕಾರಿ ಆದೇಶದನ್ವಯದಂತೆ ಅಧಿಕಾರ ಪ್ರತ್ಯೋಜನೆ ಆದೇಶವನ್ನು ಹೊರಡಿಸಿದೆ. ಸಂತ್ರಸ್ತರ ಪರಿಹಾರ ಪುನರ್ವಸತಿಗಾಗಿ ಅವಶ್ಯ ಅನುದಾನ ಬಿಡುಗಡೆ ಮಾಡಲು ಉದ್ದೇಶಿಸಿ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 01 ಸಿಆರ್‌ಆರ್ 2004, ಬೆಂಗಳೂರು, ದಿನಾಂಕ: 31ನೇ ಆಗಸ್ಟ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತೀಯ ನಾಗರೀಕ ಗಲಭೆಗಳಲ್ಲಿ ಹಾಗೂ ಒಂದೇ ಧರ್ಮದ ವಿವಿಧ ಕೋಮುಗಳ ಗಲಭೆಗಳಲ್ಲಿ ಸಾವು-ನೋವು ಅನುಭವಿಸಿದವರಿಗೆ ಆಸ್ತಿಪಾಸ್ತಿ ನಷ್ಟ ಹೊಂದಿದವರಿಗೆ ಪರಿಹಾರ ಮಂಜೂರು ಮಾಡುವ ಹಾಗೂ ಹಾನಿಗೊಳಗಾದ ಪೂಜಾ ಸ್ಥಳವನ್ನು ದುರಸ್ಥಿ ಪುನರ್ ನಿರ್ಮಾಣ ಮಾಡುವ ಕೆಲಸಗಳು ತ್ವರಿತವಾಗಿ ಆಗುವಂತೆ ಮಾಡಲು ಹಾಗೂ ಆಡಳಿತಾತ್ಮಕ ತೊಡಕುಗಳನ್ನು ನಿವಾರಿಸಲು ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳಿಗೆ ಅನುಬಂಧದಲ್ಲಿ ತೋರಿಸಿರುವ ಹಣದ ಅನುದಾನವನ್ನು ಲೆಕ್ಕ ಶೀರ್ಷಿಕೆ "2235-50-200-3-01"ರಡಿಯಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

ಅ) ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಗಲಭೆಗಳಿಗೆ ಸಂಬಂಧಿಸಿದಂತೆ ಪರಿಹಾರ ಮಂಜೂರಾತಿ ಕಟ್ಟಡ ದುರಸ್ಥಿ ಪುನರ್ ನಿರ್ಮಾಣ ಮುಂತಾದ ಕಾರ್ಯಕ್ರಮಗಳಿಗೆ ಎಷ್ಟು ಪ್ರಮಾಣದ ಖರ್ಚನ್ನು ಭರಿಸಲಾಗಿದೆ ಎಂಬ ಬಗ್ಗೆ ಲೆಕ್ಕ ಪತ್ರ ದಾಖಲೆಗಳನ್ನು ನಿರ್ವಹಿಸತಕ್ಕದ್ದು.

ಆ) ಪ್ರತಿ ಜಿಲ್ಲಾಧಿಕಾರಿಯು ಸರ್ಕಾರದಿಂದ ಬಿಡುಗಡೆ ಮಾಡಲಾದ, ಅನುದಾನದಲ್ಲಿ ವಿನಿಯೋಗಿಸಲ್ಪಟ್ಟ ಮೊತ್ತ ಹಾಗೂ ಎಷ್ಟು ಮೊತ್ತ ಉಳಿದಿದೆ ಎಂಬುವುದರ ವಿವರವಾದ ವರದಿಯನ್ನು ತಿಂಗಳಿಗೊಮ್ಮೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಇ) ಜಿಲ್ಲಾಧಿಕಾರಿಗಳು ಸರ್ಕಾರದಿಂದ ಹಂಚಿಕೆಯಾದ ಅನುದಾನವನ್ನು ಬಿಡುಗಡೆ (ವಿತರಣೆ) ಮಾಡಲು ಮಾತ್ರ ಖಜಾನೆಯಿಂದ ಹಣ ಪಡೆಯಬಹುದು, ಅನುದಾನವನ್ನು ತೆಗೆದು ವೈಯಕ್ತಿಕ ಠೇವಣಿ ಅಥವಾ ಯಾವುದೇ ಖಾತೆಗೆ ಜಮಾ ಮಾಡತಕ್ಕದ್ದಲ್ಲ, ಈ ಆರ್ಥಿಕ ವರ್ಷದ ಕೊನೆಯಲ್ಲಿ ಉಳಿದ ಅನುದಾನವನ್ನು ಸರ್ಕಾರಕ್ಕೆ ಅಧ್ಯರ್ಪಣೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

**ಅನುಬಂಧ**

| ಕ್ರಮ ಸಂಖ್ಯೆ | ಜಿಲ್ಲೆಗಳ ಹೆಸರು | ಮೊಬಲಗು (ಲಕ್ಷಗಳಲ್ಲಿ) |
|---|---|---|
| 1. | ಬೆಂಗಳೂರು ನಗರ | 2.00 ಲಕ್ಷ |
| 2. | ಬೆಂಗಳೂರು ಗ್ರಾಮಾಂತರ | 1.00 ಲಕ್ಷ |
| 3. | ಬಾಗಲಕೋಟೆ | 1.00 ಲಕ್ಷ |
| 4. | ಬೆಳಗಾವಿ | 1.00 ಲಕ್ಷ |
| 5. | ಬಳ್ಳಾರಿ | 1.50 ಲಕ್ಷ |
| 6. | ಬೀದರ್ | 1.00 ಲಕ್ಷ |
| 7. | ಬಿಜಾಪುರ | 1.00 ಲಕ್ಷ |
| 8. | ಚಾಮರಾಜನಗರ | 1.00 ಲಕ್ಷ |
| 9. | ಚಿಕ್ಕಮಗಳೂರು | 2.00 ಲಕ್ಷ |
| 10. | ಚಿತ್ರದುರ್ಗ | 1.00 ಲಕ್ಷ |

| ಕ್ರಮ ಸಂಖ್ಯೆ | ಜಿಲ್ಲೆಗಳ ಹೆಸರು | ಮೊಬಲಗು (ಲಕ್ಷಗಳಲ್ಲಿ) |
|---|---|---|
| 11. | ದಾವಣಗೆರೆ | 1.00 ಲಕ್ಷ |
| 12. | ದಕ್ಷಿಣ ಕನ್ನಡ | 1.00 ಲಕ್ಷ |
| 13. | ಧಾರವಾಡ | 1.00 ಲಕ್ಷ |
| 14. | ಗದಗ್ | 1.00 ಲಕ್ಷ |
| 15. | ಗುಲ್ಬರ್ಗಾ | 1.00 ಲಕ್ಷ |
| 16. | ಹಾಸನ | 1.00 ಲಕ್ಷ |
| 17. | ಹಾವೇರಿ | 1.00 ಲಕ್ಷ |
| 18. | ಕೊಡಗು | 1.00 ಲಕ್ಷ |
| 19. | ಕೊಪ್ಪಳ | 1.00 ಲಕ್ಷ |
| 20. | ಕೋಲಾರ | 1.00 ಲಕ್ಷ |
| 21. | ಮಂಡ್ಯ | 2.00 ಲಕ್ಷ |
| 22. | ಮೈಸೂರು | 2.00 ಲಕ್ಷ |
| 23. | ರಾಯಚೂರು | 1.00 ಲಕ್ಷ |
| 24. | ಶಿವಮೊಗ್ಗ | 1.00 ಲಕ್ಷ |
| 25. | ತುಮಕೂರು | 1.00 ಲಕ್ಷ |
| 26. | ಉತ್ತರ ಕನ್ನಡ | 1.00 ಲಕ್ಷ |
| 27. | ಉಡುಪಿ | 1.00 ಲಕ್ಷ |

**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

ಪಿ.ಆರ್.974

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಎಸ್ಇಎನ್ 2001, ದಿನಾಂಕ: 06.08.2002.
2. ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 15.03.2004.

**ಪ್ರಸ್ತಾವನೆ:**

ಶ್ರೀ ಎಂ. ಸುಬ್ರಮಣಿ ಅಪರ ನಿರ್ದೇಶಕರು (ಅಂತರ್‌ಜಲ) ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಮತ್ತು ಶ್ರೀ ಕೆ. ತಿಮ್ಮಪ್ಪ ಉಪ ನಿರ್ದೇಶಕರು ಬೆಂಗಳೂರು ಉತ್ತರ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 06.08.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ: 15.03.2004ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಎಸ್ಇಎನ್ 2001, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್, 2004**

ಸರ್ಕಾರವು ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.1998ರನ್ವಯ ರೂ. 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರನ್ವಯ ರೂ. 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052 ಸಚಿವಾಲಯ- ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-3).

ಪಿ.ಆರ್.996

**ವಿಷಯ :** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನ ಸ್ಪಂದನಾ ಕೋಶದಲ್ಲಿ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಆಸುಇ 45 ಆರ್‌ಐಐ 2004, ದಿನಾಂಕ: 25.06.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 25.06.2004ರ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿ (ಜನಸ್ಪಂದನಾ ಕೋಶ) ಇವರು ಜನ ಸ್ಪಂದನಾ ಕೋಶದಲ್ಲಿ ಮಾಹಿತಿ ಹಕ್ಕು ಅಧಿನಿಯಮ ವಿಷಯ ನಿರ್ವಹಿಸಲು ಈ ಕೆಳಕಂಡ ಸಿಬ್ಬಂದಿ ವರ್ಗವನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

1. ಅಧೀನ ಕಾರ್ಯದರ್ಶಿ 1 ಹುದ್ದೆ
2. ಶಾಖಾಧಿಕಾರಿ 1 ಹುದ್ದೆ
3. ವಿಷಯ ನಿರ್ವಾಹಕರು 2 ಹುದ್ದೆ (ಗ್ರೂಪ್ 'ಸಿ')

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2004, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್, 2004**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನಾ ಕೋಶದಲ್ಲಿ ಈ ಕೆಳಕಂಡಂತೆ ಹೆಚ್ಚುವರಿ ಹುದ್ದೆಗಳನ್ನು 'ರಿ-ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡುವ ನಿಬಂಧನೆಗಳಿಗೊಳಪಟ್ಟು ಸೃಜಿಸಲು ಮಂಜೂರಾತಿ ನೀಡಲಾಗಿದೆ.

1. ಅಧೀನ ಕಾರ್ಯದರ್ಶಿ 1 ಹುದ್ದೆ
2. ಶಾಖಾಧಿಕಾರಿ 1 ಹುದ್ದೆ
3. ವಿಷಯ ನಿರ್ವಾಹಕರು 2 ಹುದ್ದೆ (ಗ್ರೂಪ್ 'ಸಿ')

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1312 ವೆಚ್ಚ-5: 2004, ದಿನಾಂಕ: 11.08.2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2).

ಪಿ.ಆರ್.997

## ಆರ್ಥಿಕ ಸಚಿವಾಲಯ

**ವಿಷಯು :** ಶ್ರೀ ಹೆಚ್. ಆಂಜನಪ್ಪ, ಹಿಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಗುಲ್ಬರ್ಗಾ, ಇವರ ವಿರುದ್ಧ ಲಂಚ ವಿರೋಧ ಕಾಯ್ದೆ 1988 ರಡಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ :** ಐಜಿಪಿ ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ):ಸಿಟಿ/ಕ್ರೈಂ.60/ 1994 ದಿನಾಂಕ: 6-5-2004.

ಶ್ರೀ ಹೆಚ್.ಆಂಜನಪ್ಪ, ಹಿಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಗುಲ್ಬರ್ಗಾ, ಇವರು ತಮ್ಮ ನಿಗದಿತ ಆದಾಯಕ್ಕಿಂತ ಹಚ್ಚಿನ ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದಿರುತ್ತಾರೆಂದು ಶ್ರೀ ಎಂ.ಗಂಗೀರೆಡ್ಡಿ, ಡಿವೈ.ಎಸ್.ಪಿ, ಬಿ.ಓ.ಐ. ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ವರದಿಯನ್ನು ಸಲ್ಲಿಸಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2)ರ ಮೇರೆಗೆ ಕಾನೂನು ಕ್ರಮ ಜರುಗಿಸಲು ಕೋರಿದ್ದರ ಹಿನ್ನೆಲೆಯಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 17ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬಿ.ಓ.ಐ. ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸದರಿ ಕಾಯ್ದೆಯ ಕಲಂ 13(1)(ಇ) ಜೊತೆಗೆ 13(2)ರನ್ವಯ ಮೊಕದ್ದಮೆ ದಾಖಲೆ ಮಾಡಲು ಆದೇಶ ನೀಡಿದ್ದಾರೆ ಮತ್ತು ಶ್ರೀ ಬಿ.ಕಾಂತರಾಜ್, ಹಿಂದಿನ ಡಿವೈ.ಎಸ್.ಪಿ., ಬಿ.ಓ.ಐ. ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಮೊಕದ್ದಮೆ ದಾಖಲು ಮಾಡಲು ಆದೇಶಿಸಿರುತ್ತಾರೆ. ಅದರಂತೆ, ಶ್ರೀ ಬಿ.ಕಾಂತರಾಜ್‌ರವರು, ಶ್ರೀ ಹೆಚ್.ಆಂಜನಪ್ಪ, ಅಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರ ವಿರುದ್ಧ ಗುನ್ನೆ ಸಂಖ್ಯೆ: 60/94 ರಲ್ಲಿ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ ಪೊಲೀಸ್ ಠಾಣೆ, ಬೆಂಗಳೂರು, ಇಲ್ಲಿ ಪ್ರಕರಣ ದಾಖಲಿಸಿದ್ದಾರೆ ಮತ್ತು ಘನ 2ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ವಿಶೇಷ ನ್ಯಾಯಾಧೀಶರಿಗೆ ಪ್ರಥಮ ವರ್ತಮಾನ ವರದಿಯನ್ನು ನಿವೇದಿಸಿ ತನಿಖೆ ಕೈಗೊಂಡಿರುತ್ತಾರೆ ಹಾಗೂ ಈ ಬಗ್ಗೆ ವರದಿ ಸಲ್ಲಿಸಿ ಸಿ.ಆರ್.ಪಿ.ಸಿ. ಕಲಂ 93ರ ಮೇರೆಗೆ ಆರೋಪಿಯ ಮನೆ ಮತ್ತು ಕಛೇರಿಯನ್ನು ಜಪ್ತಿ ಮಾಡಲು ಜಪ್ತಿ ವಾರಂಟ್ ಅನ್ನು ಕೋರಿ ಪಡೆದಿರುತ್ತಾರೆ. ದಿನಾಂಕ 2-8-1994ರಂದು ಬೆಳಗ್ಗೆ 8.00 ಗಂಟೆಯಿಂದ ಮಧ್ಯಾಹ್ನ 2.30 ಗಂಟೆಯ ವರೆಗೆ ಈ ಆರೋಪಿತ ಅಧಿಕಾರಿಯ ವಾಸದ ಮನೆ ಸಂಖ್ಯೆ 2357, 1ನೇ ಸಿ ಮುಖ್ಯರಸ್ತೆ, ಆರ್.ಪಿ.ಸಿ.ಲೇಔಟ್, ವಿಜಯನಗರ 2ನೇ ಹಂತ, ಬೆಂಗಳೂರು ಇದರ ಜಪ್ತಿ ಕಾರ್ಯವನ್ನು ಸಾಕ್ಷಿದಾರರುಗಳಾದ ಶ್ರೀ ಜಯತೀರ್ಥರಾವ್ ಪಿ.ಎನ್. ಬಿನ್ ಪಿ.ಎಸ್.ಶ್ರೀನಿವಾಸರಾವ್, 2ನೇ ದರ್ಜೆ ಗುಮಾಸ್ತ, ನಗರ ಯೋಜನೆ ಇಲಾಖೆ ಮತ್ತು ಶ್ರೀಮತಿ ಬಿ.ಎನ್.ವಿಜಯ, ಕೋಂ ಹೆಚ್.ಎ.ಪ್ರಕಾಶ್, ದ್ವಿ.ದ.ಸ., ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಇವರುಗಳ

ಸಮಕ್ಷಮದಲ್ಲಿ ಹಾಗೂ ಕಛೇರಿ ಸಿಬ್ಬಂದಿ ಮತ್ತು ಆರೋಪಿ ಅಧಿಕಾರಿಯ ಅಣ್ಣನಾದ ಶ್ರೀ ಸೇವಾನಾಯಕ್ ಮತ್ತು ಆರೋಪಿಯ ಕುಟುಂಬ ಸದಸ್ಯರ ಸಮಕ್ಷಮದಲ್ಲಿ ಜಪ್ತಿ ಕ್ರಮ ಜರುಗಿಸಿ ಪಂಚನಾಮೆಯನ್ನು ತಯಾರಿಸಿರುತ್ತಾರೆ. ಜಪ್ತಿ ಕಾಲದಲ್ಲಿ ಕಂಡುಬಂದ ಚಿನ್ನ, ಬೆಳ್ಳಿ, ನಗದು, ಬ್ಯಾಂಕ್ ದಾಖಲೆ, ಪೀಠೋಪಕರಣಗಳು, ಬಟ್ಟೆಗಳು, ಬೆಲೆಬಾಳುವ ವಿದ್ಯುತ್ ಉಪಕರಣಗಳು ಮತ್ತು ಗೃಹೋಪಯೋಗಿ ವಸ್ತುಗಳ ವಿವರಗಳನ್ನು ಮಹಜರ್‌ನಲ್ಲಿ ನಮೂದಿಸಿರುತ್ತಾರೆ ಮತ್ತು ತನಿಖೆಯನ್ನು ನಡೆಸಿರುತ್ತಾರೆ. ತದನಂತರದಲ್ಲಿ ಈ ಪ್ರಕರಣದಲ್ಲಿ ಶ್ರೀ ಸೈಯ್ಯದ್ ರಿಯಾಜ್, ಪೊಲೀಸ್ ಇನ್ಸ್‌ಪೆಕ್ಟರ್ ಇವರನ್ನು ಆರೋಪಿಯ ಕಛೇರಿಯ ಜಪ್ತಿ ವಾರೆಂಟ್ ಜಾರಿಯ ಬಗ್ಗೆ ನೇಮಕ ಮಾಡಿದ್ದರಿಂದ ಇವರು ದಿನಾಂಕ:18–8–1994ರಂದು ಆರೋಪಿಯ ಕಛೇರಿಯಾದ ಗುಲ್ಬರ್ಗಾ ಜಿಲ್ಲೆಯ ಯಾದ್‌ಗೀರ್‌ನಲ್ಲಿರುವ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿಯನ್ನು ಪಂಚಾಯ್ತುದಾರರಾದ ಶ್ರೀ ಸಾಲಪಲ್ಲಿ ಚಂದ್ರಶೇಖರ್ ಬಿನ್ ಸಾಲಪಲ್ಲಿ ರಾಮಪ್ಪ, ಡೆಪ್ಯೂಟಿ ತಹಸೀಲ್ದಾರ್, ಸೈದಾಪುರ್, ಯಾದಗೀರ್ ತಾಲ್ಲೂಕ್, ಗುಲ್ಬರ್ಗಾ ಜಿಲ್ಲೆ ಮತ್ತು ಶ್ರೀ ಬಡಲ್ ಕೃಷ್ಣಪ್ಪ ಬಿನ್ ಬಳ್ಳಪ್ಪ, ಮ್ಯಾನೇಜರ್, ಬಿ.ಡಿ.ಓ. ಕಛೇರಿ ಯಾದಗೀರ್ ತಾಲ್ಲೂಕ್, ಗುಲ್ಬರ್ಗಾ ಜಿಲ್ಲೆ ಇವರುಗಳ ಸಮಕ್ಷಮದಲ್ಲಿ ಜಪ್ತಿ ಮಾಡಿ ಪಂಚನಾಮೆ ಮಾಡಿದ್ದು ಆರೋಪಿಗೆ ಸಂಬಂಧಪಟ್ಟ ವಸ್ತುಗಳಾಗಲಿ ದಾಖಲಾತಿಗಳಾಗಲಿ ಕಂಡುಬಂದಿರುವುದಿಲ್ಲವೆಂದು ತಿಳಿಸಿದ್ದಾರೆ. ಈ ಪ್ರಕರಣದಲ್ಲಿ ಇವರು ತನಿಖೆಯನ್ನು ಮುಂದುವರೆಸಿದ್ದಾರೆ. ತನಿಖಾಧಿಕಾರಿಯು ಆರೋಪಿ ಅಧಿಕಾರಿಯು ಎಲ್ಲಾ ಮೂಲಗಳಿಂದ ಹೊಂದಿರುವ ಆದಾಯ, ಚರ ಮತ್ತು ಸ್ಥಿರಾಸ್ಥಿಗಳ ಮೌಲ್ಯ ಮತ್ತು ಆತನ ಕುಟುಂಬದ ವೆಚ್ಚ ಇವುಗಳನ್ನು ಪರಿಶೀಲಿಸಿದಾಗ ಆರೋಪಿಯು ತನ್ನ ನಿಗದಿತ ಆದಾಯಕ್ಕಿಂತ ರೂ.9,26,325–00 ಮೌಲ್ಯದ ಹೆಚ್ಚಿನ ಸಂಪತ್ತು (ಶೇಕಡವಾರು 59.48) ಹೊಂದಿರುವುದು ದೃಢಪಟ್ಟಿರುವುದರಿಂದ 1988ರ ಲಂಚ ನಿರೋಧಕ ಕಾಯ್ದೆಯ ಕಲಂ 13(1) (ಇ) ಜೊತೆಗೆ 13(2) ಪ್ರಕಾರ ಆರೋಪಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅಭಿಯೋಜನಾ ಮಂಜೂರಾತಿಯನ್ನು ನೀಡುವಂತೆ ಸಕ್ಷಮ ಪ್ರಾಧಿಕಾರಿಯನ್ನು ಕೋರಲು ನಿವೇದಿಸಿಕೊಂಡಿರುತ್ತಾರೆ. ಇವರು ನೀಡಿದ ತನಿಖಾ ವರದಿಯಲ್ಲಿ ಆರೋಪಿಯ ಆಸ್ತಿ ಮತ್ತು ದಾಯತ್ವಗಳ ಪಟ್ಟಿಯಲ್ಲಿ ಮಾಡಿರುವ ಘೋಷಣೆಯ ಮೇರೆಗೆ ಮಾರ್ಪಾಡು ಮಾಡಿದ ಪರಿಷ್ಕೃತ ಆದಾಯ ವೆಚ್ಚ ಆಸ್ತಿಯ ವಿವರಗಳನ್ನೊಳಗೊಂಡ ಪಾಲನಾ ವರದಿಯನ್ನು ಶ್ರೀ ಬಿ.ಎ.ಜೋಯಪ್ಪ, ಡಿವೈ.ಎಸ್.ಪಿ. ಇವರು ದಿನಾಂಕ 17–7–1998ರ ನಿವೇದನಾ ಪತ್ರದಲ್ಲಿ ಒದಗಿಸಿರುತ್ತಾರೆ.

ಈ ಪ್ರಕರಣದಲ್ಲಿ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲೆಗಳನ್ನು ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 6–5–2004ರ ಪತ್ರದೊಡನೆ ಕಳುಹಿಸುತ್ತಾ, ಆಪಾದಿತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ ಕಲಂ 13(2)ರಡಿಯಲ್ಲಿ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಪ್ರಕಾರ ಸಮರ್ಪಕವಾದ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಆರೋಪಿ ಶ್ರೀ ಹೆಚ್.ಆಂಜನಪ್ಪ ಇವರು ವಾಣಿಜ್ಯ ತೆರಿಗೆ ಇಲಾಖೆಗೆ ಸೇರುವ ಮೊದಲು 1975 ಆಗಸ್ಟ್ ನಿಂದ 1976 ಜೂನ್‌ರ ವರೆಗೆ ದೊಡ್ಡಬಳ್ಳಾಪುರದ ಕೊಂಗಾಡಿಯಪ್ಪ ಕಾಲೇಜಿನಲ್ಲಿ ಪ್ರಾದ್ಯಾಪಕರಾಗಿ ಮತ್ತು 1976 ಆಗಸ್ಟ್ ನಿಂದ 1982 ಏಪ್ರಿಲ್ ವರೆಗೆ ಕೋಲಾರದ ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ್ದರು. ದಿನಾಂಕ 14–5–1982ರಂದು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ನೇಮಕಗೊಂಡಿದ್ದರು. ಕಾಲ ಕಾಲಕ್ಕೆ ಉನ್ನತ ಹುದ್ದೆಗೆ ಬಡ್ತಿ ಹೊಂದಿದ್ದು ಈ ಪ್ರಕರಣ ದಾಖಲಾಗುವ ಸಂದರ್ಭದಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿದ್ದರು ಮತ್ತು ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರಾಗಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆಗಸ್ಟ್ 1975ರಿಂದ ಇವರ ವಾಸದ ಮನೆ ಜಪ್ತಿ ಮಾಡಿದ ದಿನಾಂಕ 2–8–1994ರ ವರೆಗಿನ ಅವಧಿಯು ಪರಿಶೀಲನಾ ಅವಧಿ (ಚೆಕ್ ಪಿರಿಯಡ್) ಯಾಗಿರುತ್ತದೆ. ಈ ಪ್ರಕರಣದಲ್ಲಿ ತನಿಖೆಗಾಗಿ ಸಂಗ್ರಹಿಸಿದ ದಾಖಲಾತಿಗಳ ವಿವರ, ಆರೋಪಿಯು ಒದಗಿಸಿರುವ ಮಾಹಿತಿಗಳ ವಿವರ, ಆರೋಪ ಸಲ್ಲಿಸಿರುವ ವಾರ್ಷಿಕ ಆಸ್ತಿ ಮತ್ತು ದಾಯತ್ವಗಳ ಪಟ್ಟಿಯ ವಿವರ, ಆರೋಪಿಯ ಆದಾಯ, ಆರೋಪಿಯ ಕುಟುಂಬದ ವೆಚ್ಚ, ಆರೋಪಿಯು ಹೊಂದಿರುವ ಚರ ಮತ್ತು ಸ್ಥಿರ ಆಸ್ತಿಗಳ ವಿವರ, ಹಾಗೂ ತನಿಖೆಯಲ್ಲಿ ಕಂಡುಬಂದಂತಹ ಅಂಶಗಳನ್ನು ಪರಿಶೀಲಿಸಿ ತನಿಖಾಧಿಕಾರಿಯು ನೀಡಿದ ವರದಿಯನ್ನು ಪರಿಶೀಲಿಸಲಾಗಿದೆ.

ಈ ಪ್ರಕರಣವು ಬಲ್ಲ ಮೂಲಗಳ ಆದಾಯಕ್ಕಿಂತ ಅಪಾರ ಪ್ರಮಾಣದಲ್ಲಿ ಆಸ್ತಿಯನ್ನು ಹೊಂದಿರುವುದಕ್ಕೆ ಸಂಬಂಧಿಸಿದೆ. ಈ ಪ್ರಕರಣವನ್ನು ಪ್ರಸ್ತುತ ನಿರ್ವಹಿಸುತ್ತಿರುವ ಶ್ರೀ ಧರ್ಮಪ್ಪ, ಪೋಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ಇವರನ್ನು ಕರೆಯಿಸಲಾಯಿತು. ಅವರನ್ನು ಈ ಪ್ರಕರಣದ ಬಗ್ಗೆ ವಿಚಾರಿಸಲಾಯಿತು ಹಾಗೂ ಅವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ತಂದಿದ್ದ ದಾಖಲೆಗಳನ್ನು ಪರಿಶೀಲಿಸಲಾಯಿತು. ಶ್ರೀ ಎಮ್.ಗಂಗೀರೆಡ್ಡಿ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಸಿಟಿ ಡಿವಿಜನ್, ಬ್ಯೂರೋ ಆಫ್ ಇನ್ವೆಸ್ಟಿಗೇಷನ್, ಕರ್ನಾಟಕ ಲೋಕಾಯುಕ್ತ ಇವರು ದಿನಾಂಕ 24.6.1994ರಂದು ಸೋರ್ಸ್ ರಿಪೋರ್ಟ್‌ಅನ್ನು ತಯಾರಿಸಿರುತ್ತಾರೆ. ಸದರಿ ವರದಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್. ಅಂಜನಪ್ಪ , ಹಿಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ಸುಮಾರು ರೂ.18.50 ಲಕ್ಷಗಳ ಮೌಲ್ಯದಷ್ಟು ಆಸ್ತಿಯನ್ನು ಹೊಂದಿದ್ದಾರೆ. ಆದರೆ, ಈ ಆಪಾದಿತ ಅಧಿಕಾರಿಯ ಎಲ್ಲಾ ಬಲ್ಲ ಮೂಲಗಳ ಆದಾಯವು ರೂ.9.76 ಲಕ್ಷಗಳಾಗಿರುತ್ತದೆ. ಈ ಆಪಾದಿತ ಅಧಿಕಾರಿಯು ಸುಮಾರು ರೂ.10.74 ಲಕ್ಷಗಳ ಅಪಾರ ಆಸ್ತಿಯನ್ನು ಹೊಂದಿದ್ದಾರೆ. ಈ ಸೋರ್ಸ್ ರಿಪೋರ್ಟಿನ ಆಧಾರದ ಮೇಲೆ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಬ್ಯೂರೋ ಆಫ್ ಇನ್ವೆಸ್ಟಿಗೇಷನ್, ಕರ್ನಾಟಕ ಲೋಕಾಯುಕ್ತ ಇವರು ಈ ಪ್ರಕರಣವನ್ನು ದಾಖಲಿಸಲು ಮತ್ತು ಮುಂದಿನ ತನಿಖೆಯನ್ನು ನಡೆಸಲು ಆದೇಶಿಸಿರುತ್ತಾರೆ. ಅದರಂತೆ, ಈ ಪ್ರಕರಣವನ್ನು ಕ್ರೈಮ್ ಸಂಖ್ಯೆ:60/94ರಲ್ಲಿ ಲಂಚನಿರೋಧಕ ಕಾಯ್ದೆ, 1988ರ ಸೆಕ್ಷನ್13(1)(ಇ)ರಡಿಯಲ್ಲಿ ಸೆಕ್ಷನ್ 13(2)ರೊಂದಿಗೆ ಓದಲಾದಂತೆ, ದಾಖಲಿಸಲಾಗಿದೆ. ಈ ಆಪಾದಿತ ಅಧಿಕಾರಿಯ ಮನೆಯನ್ನು ದಿನಾಂಕ: 2.8.1994ರಂದು ಮತ್ತು ಇವರು ಕಾರ್ಯನಿರ್ವಹಿಸುತ್ತಿದ್ದ ಕಛೇರಿಯನ್ನು ದಿನಾಂಕ 18.8.1994ರಂದು

ದಾಳಿಗಳನ್ನು ಮಾಡಲಾಗಿದೆ. ಈ ಎರಡೂ ದಾಳಿಗಳನ್ನು ಸ್ವತಂತ್ರ ಸಾಕ್ಷಿ (independent punchas) ಸಮಕ್ಷಮದಲ್ಲಿ ನಡೆಸಲಾಗಿದೆ. ಈ ಎರಡೂ ಸ್ಥಳಗಳ ದಾಳಿಗಳಿಗೆ ತಯಾರಿಸಿದ ಮಹಜರ್ ಅನ್ನು ಸ್ವತಂತ್ರ ಸಾಕ್ಷಿದಾರರು ದೃಢೀಕರಿಸಿರುತ್ತಾರೆ ಮತ್ತು ಆಪಾದಿತ ಅಧಿಕಾರಿಯ ಮನೆಯ ದಾಳಿಗೆ ಸಂಬಂಧಿಸಿದಂತೆ ತಯಾರಿಸಿದ ಮಹಜರ್ ಅನ್ನು ಸಹ ಈ ಆಪಾದಿತ ಅಧಿಕಾರಿಯ ಸಹೋದರರಾದ ಶ್ರೀ ಸೇವಾನಾಯಕ್ ಇವರು ದೃಢೀಕರಿಸಿರುತ್ತಾರೆ. ಈ ಪ್ರಕರಣದಲ್ಲಿ ಶ್ರೀ ಬಿ.ಕಾಂತರಾಜ್, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ ಇವರು 23ನೇ ನ್ಯಾಯಾಲಯ, ಅಡಿಷನಲ್ ಸಿಟಿ ಸಿವಿಲ್ ಸ್ಪೆಷಲ್ ನ್ಯಾಯಾಧೀಶರು, ಬೆಂಗಳೂರು ನಗರ ಇಲ್ಲಿ ದಾಖಲಿಸಿದ್ದ ಎಫ್‌ಐಆರ್ ಅನ್ನು ಸಹ ನೋಡಲಾಯಿತು. ತನಿಖೆಯ ಸಂದರ್ಭದಲ್ಲಿ ಪರೀಕ್ಷೆಗೊಳಗಾದ ಸಾಕ್ಷಿದಾರರ ಹೇಳಿಕೆಯನ್ನು ಸಹ ಪರಿಶೀಲಿಸಲಾಯಿತು. ಶ್ರೀ ಧರ್ಮಪ್ಪ, ಪೋಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ ಇವರು ಸಾದರಪಡಿಸಿದ ದಾಖಲೆಗಳನ್ನು ಅವಲೋಕಿಸಿದಾಗ. ಈ ಮೇಲೆ ಹೇಳಿದ ಚೆಕ್ ಪಿರಿಯಡ್‌ನಲ್ಲಿ ಆರೋಪಿಯು ರೂ.16,38,713–43ಗಳ ಆದಾಯವನ್ನು ಹೊಂದಿದ್ದರು, ಆರೋಪಿ ಮತ್ತು ಅವರ ಕುಟುಂಬದ ವೆಚ್ಚ ರೂ. 8,56,417–00ಗಳಾಗಿದ್ದು, ರೂ.16,27,121–00ಗಳ ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದಿದ್ದರು ಮತ್ತು ಇದರಿಂದಾಗಿ ಆರೋಪಿಯು ತನ್ನ ನಿಗದಿತ ಆದಾಯಕ್ಕಿಂತ ಮೀರಿ ರೂ.8,44,824–57 ಗಳ ಮೌಲ್ಯದ ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿರುವುದರಿಂದಲೂ ಹಾಗೂ ಕ್ರಿಮಿನಲ್ ಮೊಕದ್ದಮೆ ಹೂಡಲು ಇದು ಸೂಕ್ತ ಪ್ರಕರಣವೆಂದು ಕಂಡುಬಂದಿರುವುದರಿಂದಲೂ, ಆಪಾದಿತ ಅಧಿಕಾರಿಯಾದ ಶ್ರೀ ಹೆಚ್. ಅಂಜನಪ್ಪ, ಹಿಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಅನುಮತಿ ನೀಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 32 ವಾತೆತ 2004, ಬೆಂಗಳೂರು, ದಿನಾಂಕ:9ನೇ ಸೆಪ್ಟೆಂಬರ್, 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್. ಆಂಜನಪ್ಪ, ಪ್ರಸ್ತುತ ವಾಣಿಜ್ಯ ತೆರಿಗೆ ಉಪ ಆಯುಕ್ತರು(ಹಿಂದಿನ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು) ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ ಕಲಂ 13(1)(ಇ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 9–9–2004 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನಾಲ್ವಿಸ್**
ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾ.ತೆ. -2).

ಪಿ.ಆರ್.998

**HOME SECRETARIAT**
**CORRIGENDUM**
**No. HD 35 PCE 2003, Bangalore, Dated: 4th September, 2004**

In Government Notification No. HD 35 PCE 2003, Dated: 14/07/2004 the name of "Hon'ble Sri Justice K. Bhakthyvatsala" may be read as "Hon'ble Sri Justice K. Bhakthavatsala".

By Order and in the name of the Governor of Karnataka,
**H.K. GUNDURAO**
Under Secretary to Government,
Home Department. (Law and Order).

PR-1002

**ಕಾನೂನು ಸಚಿವಾಲಯ**

**ವಿಷಯ :** ಕೊಡಗು ಜಿಲ್ಲೆಯ ವಿರಾಜಪೇಟೆಯ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಮತ್ತು ಅದರ ಸಿಬ್ಬಂದಿಯನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 5 ಎಲ್‌ಸಿಇ 90, ದಿನಾಂಕ: 14.11.1991.
2. ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ದಿನಾಂಕ: 07.08.2004.
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಅರೆಸರ್ಕಾರಿ ಪತ್ರ ಸಂಖ್ಯೆ: ಜಿಒಬಿ-2-319 :2003, ದಿನಾಂಕ: 17.12.2003.

**ಪ್ರಸ್ತಾವನೆ:**

ಕೊಡಗು ಜಿಲ್ಲೆಯ ವಿರಾಜಪೇಟೆಯ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಮತ್ತು ಅದರ ಸಿಬ್ಬಂದಿಯನ್ನು ಮೇಲೆ ಓದಲಾದ (1)ರ ದಿನಾಂಕ: 14.11.1991ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿತ್ತು. ಮತ್ತು ಸದರಿ ನ್ಯಾಯಾಲಯ ಹಾಗೂ ಸಿಬ್ಬಂದಿಯನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಮೇಲೆ (2) ರಲ್ಲಿ ಓದಲಾದ ದಿನಾಂಕ: 07.08.2004ರ ಸರ್ಕಾರಿ ಆದೇಶದಲ್ಲಿ ಅಂತಿಮವಾಗಿ ದಿನಾಂಕ: 01.04.2004ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ನ್ಯಾಯಾಲಯದಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ, ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡಂತೆ ಇರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 01.04.2004ರಿಂದ ಖಾಯಂಗೊಳಿಸುವಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 17.12.2004ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ, ನ್ಯಾಯಾಲಯ ಮತ್ತು ಅದರ ಸಿಬ್ಬಂದಿಯನ್ನು ಖಾಯಂ ಆಗಿ ಮುಂದುವರಿಸಲು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 214 ಎಲ್ಎಸಿ 2003, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್, 2004**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರ ಶಿಫಾರಸ್ಸಿನಂತೆ, ಕೊಡಗು ಜಿಲ್ಲೆಯ ವಿರಾಜಪೇಟೆಯ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಹಾಗೂ ಈ ಕೆಳಕಂಡ ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 01.09.2004ರಿಂದ ಖಾಯಂ ಆಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಪದನಾಮ<br>**ಪತ್ರಾಂಕಿತ** | ಹುದ್ದೆಗಳ ಸಂಖ್ಯೆ |
|---|---|---|
| 1. | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) | 1 |
| 2. | **ಸಿಬ್ಬಂದಿ**<br>ಶಿರಸ್ತೆದಾರರು | 2 |
| 3. | ಶೀಘ್ರಲಿಪಿಗಾರರು | 1 |
| 4. | ಪ್ರಥಮದರ್ಜೆ ಸಹಾಯಕರು | 6 |
| 5. | ದ್ವಿತೀಯ ದರ್ಜೆ ಸಹಾಯಕರು | 6 |
| 6. | ಬೆರಳಚ್ಚುಗಾರರು | 3 |
| 7. | ಬೆರಳಚ್ಚು ನಕಲುಗಾರರು | 2 |
| 8. | ಬೇಲಿಫ್ಸ್ | 5 |
| 9. | ಪ್ರೋಸಸ್ ಸರ್ವರ್ಸ್ | 10 |
| 10. | ಅಟೆಂಡರ್ಸ್ | 3 |
| 11. | ಜವಾನರು | 4 |
| | **ಒಟ್ಟು** | **43** |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 722 ವೆಚ್ಚ-7:04 ದಿನಾಂಕ: 10.08.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1).

ಪಿ.ಆರ್.1003

## LAW SECRETARIAT

**Sub :** Appointing of Sri B. Shivarame Gowda, Public Prosecutor Principal Sessions Judge Court, Mandya to Conduct Case in SC. No. 82/98 on the file of the Fast Track Court-I, Mandya.

**Read :** Letter No. DPN/ADM/39/04-05 Dated: 27.05.04 from the Director of Prosecution and Government Litigation Department, Bangalore.

**Government Order No. LAW 353 LSM 2004, Bangalore, Dated: 10th September, 2004**

Government are pleased to appoint Sri B. Shivarame Gowda, Public Prosecutor, Principal Sessions Judges Court, Mandya as the Special Public Prosecutor to Conduct the Case in SC. No. 82/98 on the file of the Fast Track Court-I, Mandya with immediate effect.

By Order and in the name of the Governor of Karnataka,
**G.S. REVANKAR**
Deputy Secretary to Government,
Law Department (Opn-I).

PR-1004

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** 2004-2005ನೇ ಸಾಲಿಗೆ ಎಸ್‌ಜಿಎಸ್‌ವೈ ಒಂದನೇ ಕಂತಿನ ರಾಜ್ಯದ ಪಾಲಿನ ಹಣ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ :** 1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17013: 10 :2004 ಎಸ್‌ಜಿಎಸ್‌ವೈ-I (13) ದಿನಾಂಕ 22-04-2004.

2) ಸಂಖ್ಯೆ ಆಇ 1091 ವೆಚ್ಚ 6: 2004 ದಿನಾಂಕ 23-08-2004.

**ಪ್ರಸ್ತಾವನೆ:**

ಭಾರತ ಸರ್ಕಾರವು ಉಲ್ಲೇಖಿತ ಪತ್ರ (1)ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್ ಜಿ ಎಸ್ ವೈ) ಒಂದನೇ ಕಂತಿನ ಹಣ ರೂ.20,03,38,000-00 ಲಕ್ಷ ಬಿಡುಗಡೆ ಮಾಡಿದೆ. 2004-2005ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಹಣದ ಕೊರತೆ ಇದ್ದುದರಿಂದ ಈವರೆವಿಗೆ ಮೊದಲನೇ ಕಂತಿನ ಹಣ ಬಿಡುಗಡೆ ಮಾಡಿರಲಿಲ್ಲ. ಈಗ ಆರ್ಥಿಕ ಇಲಾಖೆಯು ಉಲ್ಲೇಖ (2)ರಂತೆ 2004-2005ನೇ ಸಾಲಿಗೆ ರೂ.22,71,67,000-00 ಅನುದಾನದ ಅವಕಾಶವನ್ನು ಆಯವ್ಯಯದಲ್ಲಿ ಕಲ್ಪಿಸಿದೆ. ಆದ ಕಾರಣ ರಾಜ್ಯ ಸರ್ಕಾರವು ಎಸ್ ಜಿ ಎಸ್ ವೈ ಯಡಿ ಒಂದನೇ ಕಂತಿನ ಹಣ ರೂ.6,67,79,000-00 ಅನ್ನು ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ:

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್, 2004**

ರಾಜ್ಯ ಸರ್ಕಾರವು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಒಂದನೇ ಕಂತಿನ ಹಣ ರೂ.6,67,79,000-00 (ರೂ. ಆರು ಕೋಟಿ ಅರವತ್ತೇಳು ಲಕ್ಷ ಎಪ್ಪತ್ತೊಂಬತ್ತು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ. (ಅನುಬಂಧ ಲಗತ್ತಿಸಿದೆ.)

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-07- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ- ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005 ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಅಭಿವೃದ್ಧಿ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 277 ಪಿಬಿಎಸ್ 2004 ದಿನಾಂಕ 03-09-2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯುನಿಕ್ ನಂ. 183:2004 ದಿನಾಂಕ 06-09-2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಭಟ್**

ನಿರ್ದೇಶಕರು (ಸ್ವ.ಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ ೧೮ ಸ್ವಜಯೋ ೨೦೦೪, ಬೆಂಗಳೂರು, ದಿನಾಂಕ: ೦೬.೦೯.೨೦೦೪**

(ರೂ. ಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಜಿಲ್ಲಾ ಪಂಚಾಯತ್ ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಮೊದಲನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತು |
|---|---|---|---|---|
| 1 | 2 | 3 | 4 | 5 |
| 1. | ಬೆಂಗಳೂರು ನಗರ | 401 | 20,13,000 | 6,70,000 |
| 2. | ಬೆಂಗಳೂರು ಗ್ರಾ | 402 | 72,81,000 | 24,27,000 |
| 3. | ಚಿತ್ರದುರ್ಗ | 403 | 79,10,000 | 26,37,000 |
| 4. | ಕೋಲಾರ | 404 | 1,09,70,000 | 36,57,000 |
| 5. | ಶಿವಮೊಗ್ಗ | 405 | 79,56,000 | 26,52,000 |
| 6. | ತುಮಕೂರು | 406 | 1,17,93,000 | 39,30,000 |

| 1 | 2 | 3 | 4 | 5 |
|---|---|---|---|---|
| 7. | ಮೈಸೂರು | 407 | 91,56,000 | 30,55,000 |
| 8. | ಚಿಕ್ಕಮಂಗಳೂರು | 408 | 44,53,000 | 14,84,000 |
| 9. | ದಕ್ಷಿಣ ಕನ್ನಡ | 409 | 43,00,000 | 14,33,000 |
| 10. | ಹಾಸನ | 410 | 57,71,000 | 19,24,000 |
| 11. | ಕೊಡಗು | 411 | 16,22,000 | 5,40,000 |
| 12. | ಮಂಡ್ಯ | 412 | 75,12,000 | 25,04,000 |
| 13. | ಬೆಳಗಾಂ | 413 | 1,39,76,000 | 46,59,000 |
| 14. | ಬಿಜಾಪುರ | 414 | 92,64,000 | 30,88,000 |
| 15. | ಧಾರವಾಡ | 415 | 39,83,000 | 13,28,000 |
| 16. | ಉತ್ತರಕನ್ನಡ | 416 | 49,60,000 | 16,53,000 |
| 17. | ಗುಲ್ಬರ್ಗಾ | 417 | 1,15,13,000 | 38,38,000 |
| 18. | ಬಳ್ಳಾರಿ | 418 | 1,11,05,000 | 37,02,000 |
| 19. | ಬೀದರ್ | 419 | 78,70,000 | 26,23,000 |
| 20. | ರಾಯಚೂರು | 420 | 93,53,000 | 31,18,000 |
| 21. | ದಾವಣಗೆರೆ | 451 | 63,84,000 | 21,28,000 |
| 22. | ಚಾಮರಾಜನಗರ | 456 | 98,06,000 | 32,69,000 |
| 23. | ಉಡುಪಿ | 457 | 35,00,000 | 11,67,000 |
| 24. | ಬಾಗಲಕೋಟೆ | 461 | 47,29,000 | 15,76,000 |
| 25. | ಗದಗ್ | 462 | 63,22,000 | 21,07,000 |
| 26. | ಹಾವೇರಿ | 463 | 69,04,000 | 23,00,000 |
| 27. | ಕೊಪ್ಪಳ | 466 | 99,32,000 | 33,10,000 |
| | | ಒಟ್ಟು | **20,03,38,000** | **6,67,79,000** |

**ಟಿ. ಶಾಮಭಟ್**

ನಿರ್ದೇಶಕರು (ಸ್ವ.ಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

**Sub :** Release of SGSY I instalment of State share (25 % of the allocation) to all Districts for the year 2004-2005.

**Read :** 1. GOI Ltr. No. 17013/10/2004-SGSY-I (13) Dtd. 22-04-2004.
2. No. FD 1091 Exp-6 : 2004 Dated 23.08 .2004.

**PREAMBLE :**

Government of India has released Rs.20,03,38,000/- only to all the districts in Karnataka under Swarna Jayanthi Grama Swarozgar Yojana (SGSY) for the year 2004-2005 as I instalment as per Read (1). Due to inadequate Budget, the State could not release I instalment to all the districts till now. Now Finance Department has provided Budget of Rs,22,71,67,000/- for the year 2004-2005 as per Read (2). Hence the State is now releasing its share of Rs.6,67,79,000/- to all the Districts as I instalment. Hence this order.

**Government Order No. RDP 18 SJY 2004, Bangalore, Dated: 7th September, 2004**

The State Government accords sanction for the release of I instalment of Rs.6,67,79,000/- (Rs. Six Crore Sixty seven lakh seventy nine thousand only) under SGSY for the year 2004-2005 to all Zilla Panchayats out of the current year budget, subject to the following conditions: -

The amount should be utilised for the implementation of SGSY as per the guidelines of the SGSY Manual May 1999. The release to the implementing agency is to be made at any date within 15 days of the receipt of this G.O. without fail.

The funding pattern will be 75 : 25 between the Centre & the State.

The expenditure on the scheme is debitable to the Head of Account 2501-Spl.Progammes for Rural Development 01- Integrated Rural Development Programmes 196 Assistance to Zilla Panchayats 1- Zilla Panchayats -07 Swarna Jayanthi Grama Swarozgar Yojana –Plan 2004-2005 (2501-01-196-1-07).

The Chief Accounts Officers of the concerned Zilla Panchayats are authorised to draw the amount as per rules.

The Deputy Secretaries (Dev) / Project Directors of concerned Zilla Panchayats should submit the approved annual plan for 2004-2005.

The Monthly progress reports of physical and financial achievement should be sent to the Director (SEP), Rural Development and Panchayat Raj Department by the 10th of every succeeding month.

The Chief Accounts Officers of the concerned Zilla Panchayats shall send the audited statement of accounts and utilisation certificate to the Director (SEP), & E/o Deputy Secretary to Government, Rural Development & Panchayat Raj Dept.,

This order is issued with the concurrence of the I.F.A concurrence No. RDP 277 PBS 2004 Dated:03-09-2004 and Unique No. 183 / 2004 Dtd.06-09-2004 of R & I, RDPR Dept.

By Order and in the name of the Governor of Karnataka,
**T. Sham Bhatt**
Director (SEP) & E/o Joint Secretary to Govt.,
Rural Development & Pan.Raj Department.

**ANNEXURE**
**Government Order No. RDP 18 SJY 2004, Bangalore, Dated: 7th September, 2004**

(in Rs.)

| Sl. No. | Name of the Zilla Panchayat | Zilla Panchayat Code | Central Share released (I instalment) | State Share being released (I instalment) |
|---|---|---|---|---|
| 1. | Bangalore (U) | 401 | 20,13,000 | 6,70,000 |
| 2. | Bangalore (R) | 402 | 72,81,000 | 24,27,000 |
| 3. | Chitradurga | 403 | 79,10,000 | 26,37,000 |
| 4. | Kolar | 404 | 1,09,70,000 | 36,57,000 |
| 5. | Shimoga | 405 | 79,56,000 | 26,52,000 |
| 6. | Tumkur | 406 | 1,17,93,000 | 39,30,000 |
| 7. | Mysore | 407 | 91,56,000 | 30,55,000 |
| 8. | Chickmagalur | 408 | 44,53,000 | 14,84,000 |
| 9. | D.Kannada | 409 | 43,00,000 | 14,33,000 |
| 10. | Hassan | 410 | 57,71,000 | 19,24,000 |
| 11. | Kodagu | 411 | 16,22,000 | 5,40,000 |
| 12. | Mandya | 412 | 75,12,000 | 25,04,000 |
| 13. | Belgaum | 413 | 1,39,76,000 | 46,59,000 |
| 14. | Bijapur | 414 | 92,64,000 | 30,88,000 |
| 15. | Dharwad | 415 | 39,83,000 | 13,28,000 |
| 16. | U.Kannada | 416 | 49,60,000 | 16,53,000 |
| 17. | Gulbarga | 417 | 1,15,13,000 | 38,38,000 |
| 18. | Bellary | 418 | 1,11,05,000 | 37,02,000 |
| 19. | Bidar | 419 | 78,70,000 | 26,23,000 |
| 20. | Raichur | 420 | 93,53,000 | 31,18,000 |
| 21. | Davanagere | 451 | 63,84,000 | 21,28,000 |
| 22. | Chamarajanagar | 456 | 98,06,000 | 32,69,000 |
| 23. | Udupi | 457 | 35,00,000 | 11,67,000 |
| 24. | Bagalkote | 461 | 47,29,000 | 15,76,000 |
| 25. | Gadag | 462 | 63,22,000 | 21,07,000 |
| 26. | Haveri | 463 | 69,04,000 | 23,00,000 |
| 27. | Koppal | 466 | 99,32,000 | 33,10,000 |
| | | **Total** | **20,03,38,000** | **6,67,79,000** |

**T. Sham Bhatt**
Director (SEP) & E/o Joint Secretary to Govt.,
Rural Development & Pan.Raj Department.

PR-999

**HEALTH AND FAMILY WELFARE SECRETARIAT**

**Sub :** Sanction for prosecution in respect of Dr.K.H.Jnanendrappa, Assistant Professor of Medicine and I/c Diabetic clinic, Victoria Memorial Hospital, Bangalore.

**Ref :** Your letter No.967/3/4/2004 dated 3rd September 2004 from the Dy.Inspector General of Police, EO-II CBI, New Delhi.

**Government Order No. HFW 286, MPS 2004, Bangalore, Dated: 10th September, 2004**

WHEREAS, it is alleged that during the year 2002, Dr.K.H.Jnanaendrappa was a public servant under the Government of Karnataka and functioning as Assistant Professor of Medicine in Bangalore Medical College and also I/c Diabetic Clinic in Victoria Hospital, Bangalore.

WHEREAS, it is alleged that during the year 2002, Dr.K.M.Channakeshava was a public servant under the Government of Karnataka and functioning as Specialist cum Administrative Officer in Victoria Hospital, Bangalore.

WHEREAS, it is alleged that during the period 2002, Abdul Kareem Telgi was an under trial prisoner in Parappana Agrahara Jail, Bangalore, as an accused in Cr.No.545/2000 (P.S.Upparpet Case).

WHEREAS, it is alleged that during the aforesaid period, both Dr.K.H.Jnanendrappa and Dr.K.M.Channakeshava entered into a criminal conspiracy with Abdul Kareem Telgi for obtaining undue pecuniary advantage by abusing their official position, in the matter of issuing favourable medical certificates to acused Abdul Kareem Telgi, which were to be used in Courts in support of bail applications of Abdul Kareem Telgi.

WHEREAS, it is alleged that in furtherance of the said criminal conspiracy, when on 6.6.2002 the jail doctor Sri Prasanna Kumar referred the said under trial prisoner Abdul Kareem Telgi to the Medical Superintendent of Victoria Hospital, Bangalore along with his medical history, Dr. K.M.Channakeshava, who was the Administrative Officer and in-charge of general administration in OPD Wards and who had no authority to refer any patient to any particular doctor, dishonestly and fraudulently made an endorsement on the letter received from the jail that he had talked to the Superintendent over phone and marked the said reference to Dr.K.H.Jnanendrappa, who was present in his chamber.

WHEREAS, it is alleged that in furtherance of the said criminal conspiracy, Dr.K.H.Jnanendrappa in presence of Dr.K.M.Channakeshava and without conducting any blood sugar test and urine test of the under trial prisoner Abdul Kareem Telgi, dishonestly issued a medical certificate on 6.6.2002 on his personal letterhead by dishonestly embossing the seal of Victoria Hospital, Bangalore and wrote as under:

**"He has to be kept in calm and homely atmosphere and homely diabetic diet is essential to keep him fit"**

WHEREAS, it is alleged that in furtherance of the said criminal conspiracy, after the issue of medical certificate and the departure of Abdul Kareem Telgi, with jail staff from the hospital, Dr.K.M.Channakeshava called his Attendant Shri Krishna and told that one boy would come with a cover containing money, which should be received and given to him, i.e. Dr.K.M.Channakeshava, after some time, a boy with the said cover containing substantial cash came there and handed it over to the Attendant Shri Krishna saying that the same should be passed on Dr. K.M.Channakeshava. Acordingly, the Attendant Shri Krishna took the cover and kept it on the table of Dr.K.M.Channakeshava where Dr.K.H.Jnanendrappa was also present. Dr.K.M.Channakeshava took the cover containing cash and gave it to Dr.K.H.Jnanendrappa in the presence of Attendant Krishna saying that the said money had been sent By Abdul Kareem Telgi to him, i.e. Dr.K.H.Jnanendrappa for issuing medical certificate and it was upto him i.e. Dr.K.H.Jnanendrappa to give some share (money) to him, i.e. Dr.K.M.Channakeshava.

WHEREAS, it is further alleged that in furtherance of the said criminal conspiracy, when on 20-9-2002, the jail doctor Sunil Chavan referred the under trial prisoner Abdul Kareem Telgi again to Victoria Hospital, Bangalore, Dr.K.H.Jnanendrappa dishonestly and without conducting any blood sugar test or urine test, issued another medical certificate in favour of Abdul Kareem Telgi stating that:-

**"he was advised during the last visit dated 6-6-2002, to be kept in calm and homely atmosphere & advised to take homely diabetic diet. Because of not following the strict advice given for the calm and homely atmosphere and homely diabetic diet, the blood sugar are not coming under control & he may have acute diabetic complications which may lead to Diabetic Coma".**

This medical certificate was also issued on his personal letter head by unauthorisedly embossing the seal of Victoria Hopital, Bangalore.

